# ಕರ್ನಾಟಕ ವಿಧಾನ ಪರಿಷತ್ತು

ಚುಕ್ಕೆ ಗುರುತಿನ ಪ್ರಶ್ನೆ ಸಂಖ್ಯೆ : 308
ಸದಸ್ಯರ ಹೆಸರು : ಶ್ರೀ ಅ.ದೇವೇಗೌಡ
(ಪದವೀಧರರ ಕ್ಷೇತ್ರ)
ಉತ್ತರಿಸುವ ಸಚಿವರು : ಕಂದಾಯ ಸಚಿವರು
ಉತ್ತರಿಸುವ ದಿನಾಂಕ : 15.12.2021

<table>
<tr><th>ಕ್ರ. ಸಂ</th><th>ಪ್ರಶ್ನೆ</th><th>ಉತ್ತರ</th></tr>
<tr><td>ಅ</td><td>ರಾಮನಗರ ಜಿಲ್ಲೆ, ಮಾಗಡಿ ತಾಲ್ಲೂಕು, ಕುದೂರು ಹೋಬಳಿ, ನಾಗಸಂದ್ರ ಗ್ರಾಮದಲ್ಲಿನ ಸರ್ಕಾರಿ ಕೆರೆ ಜಮೀನನ್ನು ಅಕ್ರಮವಾಗಿ ಖಾತೆ ಬದಲಾವಣೆ ಮಾಡಲಾಗಿದೆಯೇ;</td><td>ಮಾನ್ಯ ಕರ್ನಾಟಕ ಉಚ್ಚ ನ್ಯಾಯಾಲಯವು ರಿಟ್ ಅರ್ಜಿ ಸಂಖ್ಯೆ:22034/2019, ದಿನಾಂಕ:16.10.2019ರ ಆದೇಶದಂತೆ ಶ್ರೀಮತಿ ಎನ್.ಜಿ ಸುಜಾತ ಬಿನ್ ಲೇ ಶ್ರೀ ಎನ್. ಹೆಚ್. ಗಂಗಾಧರಯ್ಯ ಎಂಬುವವರ ಹೆಸರಿಗೆ ತಹಶೀಲ್ದಾರ್, ಮಾಗಡಿ ತಾಲ್ಲೂಕು, ರವರು ಖಾತಾ ಕ್ರಮ ಜರುಗಿಸಲಾಗಿತ್ತು.<br>ನಂತರ ಘನ ನ್ಯಾಯಾಲಯದ ದಿನಾಂಕ:16.10.2019ರ ಆದೇಶವನ್ನು ಪ್ರಶ್ನಿಸಿ ಘನ ನ್ಯಾಯಾಲಯದಲ್ಲಿ ರಿಟ್ ಅಫೀಲು ಸಂಖ್ಯೆ: 120/2021 ರಂತೆ ಮೇಲ್ಮನವಿ ಸಲ್ಲಿಸಲಾಗಿದ್ದು, ಮೇಲ್ಮನವಿ ಪ್ರಕರಣದಲ್ಲಿ ಸರ್ಕಾರಿ ಕೆರೆ ಜಮೀನಿಗೆ ಸಂಬಂಧಿಸಿದಂತೆ ಮಾತ್ರ ಖಾಸಗಿ ವ್ಯಕ್ತಿಗೆ ನಡೆಸಿರುವ ಮ್ಯುಟೇಷನ್ ವಹಿವಾಟನ್ನು ರದ್ದುಪಡಿಸಿ ಸರ್ಕಾರಕ್ಕೆ ಪುನರ್‌ಸ್ಥಿತಿಗೊಳಿಸಲು ದಿನಾಂಕ:12.07.2021 ರಂದು ಆದೇಶವಾಗಿರುತ್ತದೆ. ಅದರಂತೆ ಖಾಸಗಿ ವ್ಯಕ್ತಿಯ ಹೆಸರಿನಲ್ಲಿದ್ದ ನಮೂದನ್ನು ತೆಗೆದು "ಸರ್ಕಾರಿ ಕೆರೆ" ಎಂದು ಪುನರ್ ಸ್ಥಿತಿಗೊಳಿಸಲಾಗಿರುತ್ತದೆ.</td></tr>
<tr><td>ಆ</td><td>ಅಕ್ರಮವಾಗಿ ಖಾತೆ ಬದಲಾವಣೆ ಮಾಡಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; ಬಂದಿದ್ದಲ್ಲಿ, ಅಕ್ರಮವಾಗಿ ಖಾತೆ ಬದಲಾವಣೆ ಮಾಡಿರುವ ಅಧಿಕಾರಿಗಳ ಹೆಸರು ಮತ್ತು ಹುದ್ದೆಯ ವಿವರನೀಡುವುದು;</td><td rowspan="2">ಪ್ರಶ್ನಿತ ಸರ್ಕಾರಿ ಜಮೀನಿಗೆ ಸಂಬಂಧಿಸಿದಂತೆ ಮಾನ್ಯ ಕರ್ನಾಟಕ ಉಚ್ಚ ನ್ಯಾಯಾಲಯದಲ್ಲಿ ದಾಖಲಾಗಿದ್ದ ರಿಟ್ ಅರ್ಜಿ ಸಂಖ್ಯೆ:22034/2019 ರ ಪ್ರಕರಣವನ್ನು ಸಮರ್ಪಕವಾಗಿ ನಿರ್ವಹಿಸದೆ ಹಾಗೂ ಘನ ನ್ಯಾಯಾಲಯಕ್ಕೆ ಯಾವುದೇ ಆಕ್ಷೇಪಣೆಗಳನ್ನು ಸಲ್ಲಿಸದೆ ಸರ್ಕಾರಕ್ಕೆ ವ್ಯತಿರಿಕ್ತವಾಗಿ ಆದೇಶವಾಗಲು ಮತ್ತು ಈ ಆದೇಶದ ವಿರುದ್ಧ ಸಕಾಲದಲ್ಲಿ ಮೇಲ್ಮನವಿ ಸಹ ಸಲ್ಲಿಸದೇ ನ್ಯಾಯಾಂಗ ನಿಂದನೆಗೆ ಗುರಿಪಡಿಸುವ ಮೂಲಕ ಸರ್ಕಾರಿ ಕೆರೆ ಜಮೀನನ್ನು ಖಾಸಗಿ ವ್ಯಕ್ತಿಗೆ ಖಾತೆ ಮಾಡಲು ನೇರ ಕಾರಣಕರ್ತರಾಗಿರುವ ಈ ಕೆಳಕಂಡ ಅಧಿಕಾರಿ ನೌಕರರ ವಿರುದ್ಧ ಶಿಸ್ತು ಕ್ರಮಜರುಗಿಸುವ ಪ್ರಸ್ತಾವನೆಯು ದಿನಾಂಕ:28.10.2021ರಂದು ರಾಮನಗರ ಜಿಲ್ಲಾಧಿಕಾರಿಯವರಿಂದ ಸಲ್ಲಿಕೆಯಾಗಿರುತ್ತದೆ..
<table>
<tr><th>ಅಧಿಕಾರಿ/ನೌಕರರ ಹೆಸರು</th><th>ಹುದ್ದೆ</th><th>ಅಧಿಕಾರಿ ನೌಕರರ / ದರ್ಜೆ</th></tr>
<tr><td>ಶ್ರೀ ರಮೇಶ್ ಎನ್.</td><td>ಹಿಂದಿನ ತಹಶೀಲ್ದಾರ್, ಮಾಗಡಿ ತಾಲ್ಲೂಕು</td><td>ಗ್ರೂಪ್-ಎ</td></tr>
<tr><td>ಶ್ರೀ ನರಸಿಂಹಮೂರ್ತಿ.ಟಿ. ಎನ್.</td><td>ಹಿಂದಿನ ತಹಶೀಲ್ದಾರ್, ಮಾಗಡಿ ತಾಲ್ಲೂಕು</td><td>ಗ್ರೂಪ್-ಎ</td></tr>
<tr><td>ಶ್ರೀ ಸುನೀಲ್ ಆರ್.ಎಂ,</td><td>ಹಿಂದಿನ ಪ್ರ.ದ.ಸ, ಮಾಗಡಿ ತಾಲ್ಲೂಕು ಕಛೇರಿ</td><td>ಗ್ರೂಪ್-ಸಿ</td></tr>
<tr><td>ಶ್ರೀ ಸೋಮಶೇಖರ್. ಎಸ್</td><td>ಪ್ರ.ದ.ಸ, ಮಾಗಡಿ ತಾಲ್ಲೂಕು ಕಛೇರಿ</td><td>ಗ್ರೂಪ್-ಸಿ</td></tr>
<tr><td>ಶ್ರೀ ಸಯ್ಯದ್ ಸಾಕೀಬ್ ಉರ್ ರೆಹಮಾನ್</td><td>ಹಿಂದಿನ ರಾಜಸ್ವ ನಿರೀಕ್ಷಕ, ಕುದೂರು ಹೋಬಳಿ, ಮಾಗಡಿ ತಾಲ್ಲೂಕು,</td><td>ಗ್ರೂಪ್-ಸಿ</td></tr>
<tr><td>ಶ್ರೀ ಕೆ.ಸಿ. ವೆಂಕಟರಂಗಯ್ಯ</td><td>ಹಿಂದಿನ ಗ್ರಾಮ ಲೆಕ್ಕಿಗ, ನಾರಸಂದ್ರ ವೃತ್ತ, ಮಾಗಡಿ ತಾಲ್ಲೂಕು</td><td>ಗ್ರೂಪ್-ಸಿ</td></tr>
<tr><td>ಶ್ರೀಮತಿ ಸುಪ್ರಿತ .ಯು,</td><td>ಗ್ರಾಮ ಲೆಕ್ಕಿಗರು, ತಾಲ್ಲೂಕು ಕಛೇರಿ ಮಾಗಡಿ ತಾಲ್ಲೂಕು</td><td>ಗ್ರೂಪ್-ಸಿ</td></tr>
<tr><td>ಶ್ರೀಮತಿ ಯಲ್ಲಮ್ಮ</td><td>ಡಿ-ಗ್ರೂಪ್ ನೌಕರರು, ತಾಲ್ಲೂಕು ಕಛೇರಿ ಮಾಗಡಿ ತಾಲ್ಲೂಕು.</td><td>ಗ್ರೂಪ್-ಸಿ</td></tr>
</table>
ಸದರಿ ಪ್ರಕರಣದಲ್ಲಿ ತಹಶೀಲ್ದಾರ್ ಮತ್ತು ಇತರೆ ನೌಕರರುಗಳ ವಿರುದ್ಧದ ಆರೋಪಗಳಿಗೆ ಸಂಬಂಧಿಸಿದಂತೆ, ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿಗಳು 1957ರನ್ವಯ ದೋಷಾರೋಪಣಾ ಪಟ್ಟಿಯನ್ನು ದಿನಾಂಕ:10.12.2021ರಂದು ಹೊರಡಿಸಲಾಗಿದೆ.</td></tr>
<tr><td>ಇ</td><td>ಅಕ್ರಮವಾಗಿ ಖಾತೆ ಬದಲಾವಣೆ ಮಾಡಿರುವ ಅಧಿಕಾರಿಗಳ ವಿರುದ್ಧ ಶಿಸ್ತು ಕ್ರಮ ತೆಗೆದು ಕೊಳ್ಳಲಾಗಿದೆಯೇ; ಹಾಗಿದ್ದಲ್ಲಿ, ಮಾಹಿತಿ ನೀಡುವುದು?</td></tr>
</table>

ಸಂಖ್ಯೆ:ಆರ್‌ಡಿ/136/ಟಿಆರ್‌ಎಂ/2021

(ಆರ್. ಅಶೋಕ)